ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಶುಕ್ರವಾರ, ದಿನಾಂಕ : 05 ನೇ ಫೆಬ್ರುವರಿ, 2021

ಕೋವಿಡ್-19 ಮಹಾಮಾರಿಯಿಂದ ಆಟೋ& ಟ್ಯಾಕ್ಸಿ ಚಾಲಕರಿಗೆ ಸಹಾಯಧನ ಮಂಜೂರು ಮಾಡಿರುವ ಬಗ್ಗೆ

ಶ್ರೀ ಎಂ. ನಾರಾಯಣಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

442 (509) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ರಾಜ್ಯ ಸರ್ಕಾರವು ಈ ವರ್ಷದ ಮಾಹಮಾರಿ ಸಾಂಕ್ರಾಮಿಕ ರೋಗವಾದ ಕೋವಿಡ್-19ರ ಪ್ರಭಾವಕ್ಕೆ ಒಳಗಾಗಿ ಕಷ್ಟ ಅನುಭವಿಸುತ್ತಿರುವ ಆಟೋ ಮತ್ತು ಟ್ಯಾಕ್ಸಿ ಚಾಲಕರಿಗೆ ರೂ. 5,000/- ಕನಿಷ್ಠ ಸಹಾಯ ಧನವನ್ನು ಘೋಷಿಸಿದ್ದು ಇದು ಸಾವಿರಾರು ಫಲಾನುಭವಿಗಳಿಗೆ ತಲುಪಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇದರ ಬಗ್ಗೆ ಕೈಗೊಂಡ ಕ್ರಮಗಳೇನು;

(ಆ) ಇಲ್ಲಿಯವರೆಗೆ ಎಷ್ಟು ಜನ ಫಲಾನುಭವಿಗಳಿಗೆ ಸಹಾಯಧನವನ್ನು ನೀಡಲಾಗಿದೆ;

(ಇ) ಇದಕ್ಕಾಗಿ ಮೀಸಲಿಟ್ಟ ಒಟ್ಟು ಪ್ರಮಾಣ ಎಷ್ಟು; ಇಲ್ಲಿಯವರೆಗೆ ಹಂಚಿಕೆಯಾದ ಹಾಗೂ ಬಾಕಿ ಉಳಿಸಿಕೊಂಡಿರುವ ಹಣವೆಷ್ಟು; (ಜಿಲ್ಲಾವಾರು ಅಂಕಿ ಅಂಶಗಳ ಸಹಿತ ಸಂಪೂರ್ಣ ವಿವರಣೆಯನ್ನು ನೀಡುವುದು)